2



# ಕರ್ನಾಟಕ ವಿಧಾನ ಪರಿಷತ್

| | | | |
|---|---|---|---|
| 1. | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | (233)84 |
| 2. | ಸದಸ್ಯರ ಹೆಸರು | : | ಶ್ರೀ ಎನ್.ಎಸ್. ಬೋಸರಾಜು |
| 3. | ಉತ್ತರಿಸಬೇಕಾದ ದಿನಾಂಕ | : | 16.07.2019. |
| 4. | ಉತ್ತರಿಸಬೇಕಾದ ಸಚಿವರು | : | ವೈದ್ಯಕೀಯ ಶಿಕ್ಷಣ ಸಚಿವರು. |

| ಕ್ರ.ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| 1. | ರಾಯಚೂರಿನಲ್ಲಿರುವ ಸರ್ಕಾರಿ ವೈದ್ಯಕೀಯ ಕಾಲೇಜಿನಲ್ಲಿರುವ ಪ್ರವೇಶಾತಿಗಳ ಸಂಖ್ಯೆ ಎಷ್ಟು; ಪ್ರವೇಶಾತಿಗಳ ಅನುಗುಣವಾಗಿ ಇರಬೇಕಾಗಿರುವ ಹಾಸಿಗೆಗಳ ಸಂಖ್ಯೆ ಎಷ್ಟು? | ರಾಯಚೂರು ವೈದ್ಯಕೀಯ ವಿಜ್ಞಾನಗಳ ಸಂಸ್ಥೆಯಲ್ಲಿ ಪ್ರಸ್ತುತ 150 ಸ್ನಾತಕ (ಎಂಬಿಬಿಎಸ್)ವೈದ್ಯ ವಿದ್ಯಾರ್ಥಿಗಳ ಪ್ರವೇಶಾತಿಯನ್ನು ಪಡೆಯಲಾಗುತ್ತಿದ್ದು, ಈ ಪ್ರವೇಶಾತಿಗಳಿಗೆ ಅನುಗುಣವಾಗಿ 750 ಹಾಸಿಗೆಗಳ ಸೌಲಭ್ಯವನ್ನು ಹೊಂದಿರಬೇಕಾಗಿರುತ್ತದೆ. |
| 2. | ರಾಯಚೂರಿನಲ್ಲಿರುವ ರಿಮ್ಸ್ ಆಸ್ಪತ್ರೆಯಲ್ಲಿ ಖಾಲಿ ಇರುವ ವೈದ್ಯರು ಹಾಗೂ ಸಿಬ್ಬಂದಿಗಳ ಸಂಖ್ಯೆ ಎಷ್ಟು; ಖಾಲಿ ಇರುವ ಹುದ್ದೆಗಳನ್ನು ಭರ್ತಿ ಮಾಡಲು ಸರ್ಕಾರ ತೆಗೆದುಕೊಂಡಿರುವ ಕ್ರಮಗಳೇನು? | ಪ್ರಸ್ತುತ 66 ಬೋಧಕ ಮತ್ತು ಹಿರಿಯ /ಕಿರಿಯ ಸ್ಥಾನಿಕರ ಹುದ್ದೆಗಳು ಖಾಲಿ ಇದ್ದು, ಅವುಗಳಲ್ಲಿ 21 ಹುದ್ದೆಗಳಿಗೆ ಈಗಾಗಲೇ ನೇರ ಸಂದರ್ಶನ ಪ್ರಕ್ರಿಯೆ ಪೂರ್ಣಗೊಂಡಿದ್ದು, ತಾತ್ಕಾಲಿಕ ಆಯ್ಕೆ ಪಟ್ಟಿ ಹೊರಡಿಸಲು ಕ್ರಮ ವಹಿಸಲಾಗುತ್ತಿದೆ. ಬೇಕಾಗಿರುತ್ತದೆ. ಇನ್ನುಳಿದ 45 ಸ್ಥಾನಿಕರ ಹುದ್ದೆಗಳನ್ನು ಭರ್ತಿ ಮಾಡಲು ಸಂಸ್ಥೆಯ ವತಿಯಿಂದ ಕ್ರಮ ಕೈಗೊಳ್ಳಲಾಗುತ್ತಿದೆ.<br><br>ಗ್ರೂಪ್-ಸಿ ಹುದ್ದೆಗಳಲ್ಲಿ 172 ಬೋಧಕೇತರ ಹುದ್ದೆಗಳು ಖಾಲಿ ಇದ್ದು, ಈ ಬೋಧಕೇತರ ಹುದ್ದೆಗಳನ್ನು ಭರ್ತಿ ಮಾಡಲು ವೃಂದ ಮತ್ತು ನೇಮಕಾತಿ ನಿಯಮಗಳು ರೂಪಿತವಾಗಿರುವುದಿಲ್ಲ. ಆದಾಗ್ಯೂ ಆಡಳಿತಾತ್ಮಕ ಹಾಗೂ ಆಸ್ಪತ್ರೆಗೆ ಬರುವ ರೋಗಿಗಳ ಹಿತದೃಷ್ಟಿಯಿಂದ 96 ಹುದ್ದೆಗಳನ್ನು 2007-08 ನೇ ಸಾಲಿನಲ್ಲಿ ಸಂಚಿತ ವೇತನದಲ್ಲಿ ಭರ್ತಿ ಮಾಡಿಕೊಂಡು ಮುಂದುವರಿಸಲಾಗುತ್ತಿದೆ. ಇನ್ನುಳಿದ 41 ಹುದ್ದೆಗಳು ಶುಶ್ರೂಷಕರು, ತಂತ್ರಜ್ಞರು, ಎಂ.ಎಸ್.ಡಬ್ಲ್ಯೂ ಕೌನ್ಸಿಲರ್ ಹುದ್ದೆಗಳಾಗಿದ್ದು, ಈ ಹುದ್ದೆಗಳನ್ನು ಸ್ವೈಫಂಡರಿ ಆಧಾರದ ಮೇಲೆ ಕಾರ್ಮಿಕ ಕಾಯ್ದೆಯನ್ವಯ 2016ನೇ ಸಾಲಿನಿಂದ ಇಲ್ಲಿಯವರೆಗೆ ಭರ್ತಿ ಮಾಡಿಕೊಂಡು ಮುಂದುವರಿಸಲಾಗಿದೆ. ಇನ್ನುಳಿದ 35 ಹುದ್ದೆಗಳನ್ನು ಅವಶ್ಯಕತೆಗಳಿಗನುಗುಣವಾಗಿ ಮುಂದಿನ ದಿನಗಳಲ್ಲಿ ಭರ್ತಿ ಮಾಡಲು ಕ್ರಮವಹಿಸಲಾಗುವುದು. |
| 3. | ರಾಯಚೂರಿನಲ್ಲಿರುವ ರಾಜೀವ್ ಗಾಂಧಿ ಸೂಪರ್ ಸ್ಪೆಷಾಲಿಟಿ ಆಸ್ಪತ್ರೆಯನ್ನು ರಿಮ್ಸ್ ನಿಂದ ಬೇರ್ಪಡಿಸಿ ಪ್ರತ್ಯೇಕವಾಗಿ ಆಸ್ಪತ್ರೆ ನಡೆಸಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು? | ಸರ್ಕಾರದ ಪರಿಶೀಲನೆಯಲ್ಲಿರುವುದಿಲ್ಲ. |

ಸಂಖ್ಯೆ: ಎಂಇಡಿ 17 ಎಂಎಂಇ 2019

(ಈ. ತುಕಾರಾಮ್)
ವೈದ್ಯಕೀಯ ಶಿಕ್ಷಣ ಸಚಿವರು